# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1335 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಬಿ.ಜಿ.ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ | 23/09/2021 |
| 4) | ಉತ್ತರಿಸುವವರು | ಮಾನ್ಯ ಉನ್ನತ ಶಿಕ್ಷಣ, ಐಟಿ-ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು. |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ "ಉದ್ಯೋಗ ವಿನಿಮಯ ಕೇಂದ್ರ"ದಲ್ಲಿ ನೋಂದಾಯಿಸಿಕೊಂಡಿರುವ ಪದವೀಧರರ ಸಂಖ್ಯೆ ಎಷ್ಟು; (ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಕಲಬುರಗಿ ಜಿಲ್ಲೆಯಲ್ಲಿ ಒಟ್ಟು 465 ಪದವೀಧರರು ಮತ್ತು ಯಾದಗಿರಿ ಜಿಲ್ಲೆಯಲ್ಲಿ ಒಟ್ಟು 180 ಪದವೀಧರರು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿದ್ದಾರೆ. ವಿವರ ಈ ಕೆಳಗಿನಂತಿದೆ.<br><table><tr><td>ಜಿಲ್ಲೆ</td><td>2018-19</td><td>2019-20</td><td>2020-21</td><td>ಒಟ್ಟು</td></tr><tr><td>ಕಲಬುರಗಿ</td><td>153</td><td>193</td><td>119</td><td>465</td></tr><tr><td>ಯಾದಗಿರಿ</td><td>41</td><td>100</td><td>39</td><td>180</td></tr></table> |
| ಆ) | ನೋಂದಾಯಿತ ಪದವೀಧರರಲ್ಲಿ ಎಷ್ಟು ಪದವೀಧರರಿಗೆ ಉದ್ಯೋಗ ದೊರಕಿದೆ; (ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಆಯೋಜಿಸಿದ ಉದ್ಯೋಗ ಮೇಳಗಳ ಮೂಲಕ ಕಲಬುರಗಿ ಜಿಲ್ಲೆಯಲ್ಲಿ ಒಟ್ಟು 306 ಪದವೀಧರರಿಗೆ ಮತ್ತು ಯಾದಗಿರಿ ಜಿಲ್ಲೆಯಲ್ಲಿ ಒಟ್ಟು 188 ಪದವೀಧರಿಗೆ ಉದ್ಯೋಗಾವಕಾಶ ಕಲ್ಪಿಸಲಾಗಿದೆ. ವಿವರ ಈ ಕೆಳಗಿನಂತಿದೆ.<br><table><tr><td>ಜಿಲ್ಲೆ</td><td>2018-19</td><td>2019-20</td><td>2020-21</td><td>ಒಟ್ಟು</td></tr><tr><td>ಕಲಬುರಗಿ</td><td>40</td><td>105</td><td>161</td><td>306</td></tr><tr><td>ಯಾದಗಿರಿ</td><td>31</td><td>65</td><td>92</td><td>188</td></tr></table> |
| ಇ) | ಉದ್ಯೋಗ ದೊರಕದಿರುವ ಪದವೀಧರರಿಗೆ ಉದ್ಯೋಗಾವಕಾಶ ಕಲ್ಪಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ಉದ್ಯೋಗ ದೊರಕದಿರುವ ಪದವೀಧರರಿಗೆ ಉದ್ಯೋಗ ಒದಗಿಸಿಕೊಡಲು ಕೈಗಾರಿಕಾ ತರಬೇತಿ ಮತ್ತು ಉದ್ಯೋಗ ಇಲಾಖೆಯ ಉದ್ಯೋಗ ವಿಭಾಗದಲ್ಲಿ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಜಾರಿಗೆ ತಂದಿರುವ ಯೋಜನೆಗಳು ಈ ಕೆಳಕಂಡಂತಿದೆ:-<br>1) **ನೋಂದಣಿ ಮತ್ತು ವೃತ್ತಿ ಮಾರ್ಗದರ್ಶನ** – ಉದ್ಯೋಗಾಕಾಂಕ್ಷಿಗಳನ್ನು ಉದ್ಯೋಗ ವಿನಿಮಯ ಕೇಂದ್ರಗಳ ಮೂಲಕ ನೋಂದಾಯಿಸಿಕೊಳ್ಳಲಾಗುತ್ತಿದ್ದು, ಅವರ ವಿದ್ಯಾರ್ಹತೆಗೆ ತಕ್ಕಂತೆ ಲಭ್ಯವಿರುವ ಶಿಕ್ಷಣ/ತರಬೇತಿ ಸೌಲಭ್ಯ ಹಾಗೂ ಉದ್ಯೋಗಾವಕಾಶಗಳ ಬಗ್ಗೆ ವೃತ್ತಿ ಮಾರ್ಗದರ್ಶನ ನೀಡಲಾಗುತ್ತಿದೆ.<br>2) **ಸ್ಟಡಿ ಸರ್ಕಲ್:** ಸಾರ್ವಜನಿಕ ವಲಯದಲ್ಲಿ ಹೆಚ್ಚಿನ ನೇಮಕಾತಿಗಳು ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನಡೆಯುತ್ತಿರುವುದರಿಂದ ಆದರಲ್ಲೂ ಗ್ರಾಮೀಣ ಅಭ್ಯರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಉಚಿತ ಪರೀಕ್ಷಾಪೂರ್ವ ತರಬೇತಿಗಳನ್ನು ಜಿಲ್ಲಾ ಉದ್ಯೋಗ ವಿನಿಮಯ ಕಚೇರಿಗಳಲ್ಲಿ **ಸ್ಟಡಿ ಸರ್ಕಲ್** ಕಾರ್ಯಕ್ರಮದ ಅಡಿ ಸಂಪನ್ಮೂಲ ವ್ಯಕ್ತಿಗಳ ಮೂಲಕ ತರಬೇತಿ ಒದಗಿಸಲಾಗುತ್ತಿದೆ. |

--2

| | | |
|---|---|---|
| | | 3) ಉದ್ಯೋಗ ಮೇಳ: ಉದ್ಯೋಗಾಕಾಂಕ್ಷಿಗಳ ಮತ್ತು ನಿಯೋಜಕರನ್ನು ಒಂದೇ ವೇದಿಕೆಯಲ್ಲಿ ತರಲು ಉದ್ಯೋಗ ಮೇಳಗಳನ್ನು ಪ್ರತಿ ಜಿಲ್ಲಾ ಉದ್ಯೋಗ ವಿನಿಮಯ ಕಚೇರಿಗಳ ಮೂಲಕ ಆಯೋಜಿಸಲಾಗುತ್ತಿದ್ದು, ಇದರಿಂದ ಉದ್ಯೋಗಾವಕಾಶಗಳ ಲಭ್ಯತೆ ಮತ್ತು ಅಗತ್ಯ ಮಾನವ ಸಂಪನ್ಮೂಲಗಳ ನೇಮಕಕ್ಕೆ ಅವಕಾಶ ಕಲ್ಪಿಸಲಾಗುತ್ತಿದೆ. |
| ಈ) | ನಿರುದ್ಯೋಗಿ ಪದವೀಧರರಿಗೆ ನಿರುದ್ಯೋಗ ಭತ್ಯೆ ನೀಡಲಾಗುತ್ತಿದೆಯೇ? (ವಿವರ ನೀಡುವುದು.. | ಕೈಗಾರಿಕಾ ತರಬೇತಿ ಮತ್ತು ಉದ್ಯೋಗ ಇಲಾಖೆಯಲ್ಲಿ ನಿರುದ್ಯೋಗ ಪದವೀಧರರಿಗೆ ನಿರುದ್ಯೋಗ ಭತ್ಯೆ ನೀಡುವ ಯೋಜನೆ ಜಾರಿಯಲ್ಲಿರುವುದಿಲ್ಲ. |

**ಸಂಖ್ಯೆ: ಕೌಉಜೀಇ 64 ಕೈತಪ್ರ 2021**

(ಡಾ.ಸಿ.ಎನ್.ಅಶ್ವಥ ನಾರಾಯಣ)
ಉನ್ನತ ಶಿಕ್ಷಣ, ಐಟಿ–ಬಿಟಿ ವಿಜ್ಞಾನ ಮತ್ತು
ತಂತ್ರಜ್ಞಾನ, ವಿದ್ಯುನ್ಮಾನ ಮತ್ತು
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ
ಜೀವನೋಪಾಯ ಸಚಿವರು.